# 111

# ಭಕ್ತ ಧ್ರುವ

(ಏಕಾಂಕ ನಾಟಕ)




ರಚಯಿತ:

ಸುಬ್ರಾಯ, ಅನಂತಪುರ

ಕುಂಬಳೆ.



1956.



ಒಂದಾಣೆ




ಮಾಲೆ

## 'ಒಂದಾಣೆ ಮಾಲೆ'ಯ ಪ್ರಕಟಣೆಗಳು:

೧*ಕೆಪ್ಪಟೆರಾಯ; ೨ ನಾಶೀಶ್ವರರು(ದ್ವಿ.ಮುದ್ರಣ); ೩ ಕಳ್ಳನಿಗೆ ಸಂಭಾವನೆ (ದ್ವಿ.ಮುದ್ರಣ) ೪ *ಸದ್ರಿಸುಬ್ಬ; ೫ ಅದ್ಭುತ ತ್ಯಾಗ (ದ್ವಿ.ಮುದ್ರಣ); ೬ *ಚುನಾವಣೆ ಅರ್ಥಾತ್ ಬನಾವಣೆ; ೭*ಬೀಡಿ ಸೇದಬೇಡಿ ಮತ್ತು ಆ ಮಗು; ೮*ಇಂಗ್ಲಿಷ್–ಕನ್ನಡ ಅರ್ಥಕೋಶ; ೯ ಲಂಚಕ್ಕೆ ಸಂಚಕಾರ (ದ್ವಿ.ಮುದ್ರಣ); ೧೦ *ಟಿಶ್ಯೂ ಔಷಧಿಗಳ ಕೈಪಿಡಿ; ೧೧ ಶ್ರೀ ಕ್ಷೇತ್ರ ಧರ್ಮಸ್ಥಳ (ಚ. ಮುದ್ರಣ); ೧೨*ಜೀವದ ಮೌಲ್ಯ ಮತ್ತು ಇತರ ಕಥೆಗಳು; ೧೩ ಸತ್ತವನ ಸೇಡು ಮತ್ತು ಇತರ ಕಥೆಗಳು; ೧೪ *ವೆಂಕಟನ ಸಂಕಟ; ೧೫ ಬಾಬಿಗೆ ಬಾಸಿಂಗ (ದ್ವಿ.ಮುದ್ರಣ); ೧೬ ವೇಣೂರಿನ ಗತವೈಭವ(ದ್ವಿ.ಮುದ್ರಣ); ೧೭ ಒಗಟುಗಳು (ದ್ವಿ. ಮುದ್ರಣ); ೧೮ ಜಗಳಗಂಟಿ ಮತ್ತು ಇತರ ಕಥೆಗಳು; ೧೯ ರಥೋತ್ಸವ; ೨೦ ಕರಿನಾಯಿ ಮತ್ತು ಮುಪ್ಪು; ೨೧ ಭಾರತದ ಮಹಾನಗರ–I(ದ್ವಿ.ಮುದ್ರಣ); ೨೨ ತಿರುಕ್ಕುರಲ್ (ದ್ವಿ.ಮುದ್ರಣ); ೨೩ ಸೂರ್ಯನ ಸಂಸಾರ; ೨೪ ಭಾರತದ ಮಹಾನಗರ-II (ದ್ವಿ.ಮು); ೨೫ ಧೈರ್ಯ ಮತ್ತು ಇತರ ಸತ್ಯಕಥೆಗಳು; ೨೬ ಮಾರಾವತಾರ(ದ್ವಿ.ಮು); ೨೭*ಹಾಸವಿಲಾಸ; ೨೮ ಸತ್ಯವಂತ ಬಾಬಿ [ದ್ವಿ.ಮುದ್ರಣ]; ೨೯ ಜಾಣ್ಮೆಯ ಒಗಟುಗಳು (ದ್ವಿ.ಮು); ೩೦ ಜಾತಕ ಕಥೆಗಳು; ೩೧ ಕಾರ್ಕಳದ ಚರಿತ್ರೆ; ೩೨ ಮರ್ಜಿ; ೩೩ ದರ್ಶನದ ಕಥೆಗಳು; ೩೪ ಅಳುವಿನ ಹೊಳೆ ಮತ್ತು ಕೇಶವಭೂಪ; ೩೫ ತರಾಬಿನ ಪೀಪಾಯಿಗಳು; ೩೬ ಉಪದೇಶ ಶತಕ; ೩೭*ನಿಮಗೆ ಗೊತ್ತಿದೆಯೇ?; ೩೮ ಚತುರ ಚಮತ್ಕಾರ; ೩೯ ಸತೀ ಸಾವಿತ್ರಿ (ದ್ವಿ.ಮುದ್ರಣ); ೪೦ ಆಭರಣಗಳ ಪೆಟ್ಟಿಗೆ ಮತ್ತು ಇತರ ಕಥೆಗಳು; ೪೧ ಭಾರತದ ಮಂತ್ರಿಮಂಡಲಗಳು(ದ್ವಿ.ಮುದ್ರಣ); ೪೨ ಕಾಲುಬಳೆಯ ಕಥೆ; ೪೩ ಭಾರತದ ನಾಲ್ಕು ಕಲಶಗಳು; ೪೪ ವ್ಯಸನದಿಂದ ಲಾಭ ಮತ್ತು ಇತರ ಕಥೆಗಳು; ೪೫ ಸುಭಾಷಿತ; ೪೬ ೧೮೫೭ರ ಸಿಪಾಯಿದಂಗೆ; ೪೭ ಅಕಾಂಡ ತಾಂಡವ; ೪೮ ಸಾಹಸದ ಕಥೆಗಳು; ೪೯ ಸಂಜ್ಞಾಜ್ಞಾನಕೋಶ; ೫೦ ಪಂಡಿತನ ಪಿಟಿಲು; ೫೧ ಭೋಗಯಾತ್ರೆ; ೫೨ ಸಂಗ್ರಾಮಸಿಂಹ; ೫೩ ಧರ್ಮಶಿಕ್ಷಾ; ೫೪ ಮಹಾತ್ಮ; ೫೫ ಮೀರಾಬಾಯಿ; ೫೬ ವೀರರಮಣಿ ಕರ್ಮದೇವಿ; ೫೭ ಅರಳಿದ ನಗು; ೫೮ ಸಚಿತ್ರ ಜಪಾನ್; ೫೯ ಚುಟ್ಟಬಿಟ್ಟಧಿಟ್ಟ; ೬೦ ನಿರಪರಾಧಿ; ೬೧ ಭಕ್ತವಾಣಿ; ೬೨ ಜಾನಪದ ಸಾಹಿತ್ಯ; ೬೩ ಡಾಕ್ಟರ್ ಆರೋಗ್ಯಮ್; ೬೪ ಲೌಕಿಕ ನ್ಯಾಯಗಳು; ೬೫*ಶಿಶುಪಾಲ ಮಾನಭಂಗ; ೬೬ ಜರಾಸಂಧ ವಧೆ; ೬೭ ಜವಾಹರಲಾಲ (ದ್ವಿ.ಮುದ್ರಣ); ೬೮ ಕರುಣೆ ಮತ್ತು ಇತರ ಕಥೆಗಳು; ೬೯*ಶ್ರೀಕ್ಷೇತ್ರ ಉಡುಪಿ; ೭೦ ವಿನೋದ ವಿಹಾರ; ೭೧ ಭಾರತದ ಗತವೈಭವ; ೭೨ ಸತ್ಯ ಹರಿಶ್ಚಂದ್ರ; ೭೩ ಸೂಕ್ತಿಗಳು; ೭೪ ಉ.ಕ.ದ ಯಕ್ಷಗಾನ ಕಲಾವಿದರು; ೭೫ ದೇವರ ಸಾಮ್ರಾಜ್ಯದಲ್ಲಿ....; ೭೬ ಕ್ರಾಂತಿಕಂಠೀರವ ಭಗತ್‌ಸಿಂಘ್; ೭೭ ಜಾತಕಪಠನ ಮತ್ತು ಇತರ ಕಥೆಗಳು; ೭೮ ಅಮೃತವಾಣಿ; ೭೯ ಮಾಯಾಮೃಗ; ೮೦ ಡಾಕ್ಟರ್ ಗಾಂಧೀಜಿ; ೮೧* ಆದಿಶ್ರೀ ಶಂಕರಾಚಾರ್ಯರ ಜೀವನ ಚರಿತ್ರೆ; ೮೨ ಆದಿಶ್ರೀ ಶಂಕರಾಚಾರ್ಯ ವಿರಚಿತ ಸ್ತೋತ್ರಗಳು (ಅರ್ಥ ಸಹಿತ); ೮೩ ಬೆಡಗಿನ ನಾಡು ಕೊಡಗು; ೮೪ ಆಮೆಯ ಚಿಪ್ಪು ಮತ್ತು ಇತರ ಸತ್ಯಕಥೆಗಳು; ೮೫ ಮಂಗಳೂರಿಂದ ಮಧುರೆಗೆ; ೮೬ ಸತೀ ವೃಂದಾ; ೮೭ ಗೌತಮನ ಗೃಹತ್ಯಾಗ; ೮೮ ಗೃಹವೈದ್ಯ; ೮೯ ನಮ್ಮ ನಾಟಕಗಳು; ೯೦ ಜಾನಪದ ಕಥೆಗಳು; ೯೧ ಕೆಲವು 'ಉಪಯುಕ್ತ ಸಲಹೆಗಳು. ೯೨ ಅಭಿಜ್ಞಾನ ಶಾಕುಂತಲದಲ್ಲಿ ಲೋಕನೀತಿ. ೯೩ ಹೋಮಿಯೋಪಥಿ-ಚಿಕಿತ್ಸಾಸಾರ. ೯೪ ಯಕ್ಷಗಾನ ನಾಟಕದ ಪರಂಪರೆ; ೯೫ ಪುನರುಜ್ಜೀವನ (ಏಕಾಂಕ ನಾಟಕ); ೯೬ ಪ್ರಥಮ ಚಿಕಿತ್ಸೆಯ ಕೈಪಿಡಿ; ೯೭ ಹಸ್ತರೇಖಾ ವಿಜ್ಞಾನ; ೯೮ ಸ್ವಾತಂತ್ರ್ಯ; ೯೯ ಭಾರತೀಯ ಸ್ವಾತಂತ್ರ್ಯ ಸಂಗ್ರಾಮ; ೧೦೦ ಭಕ್ತಕುಚೇಲ; ೧೦೧ ಉತ್ತರನ ಪೌರುಷ; ೧೦೨ ಕುಮಾರ; ೧೦೩ ಕೇರಳ ಜ್ಯೋತಿಷ ೧೦೪ ಒಗಟುಗಳ ಗೊಂಚಲು. ೧೦೫ ಊರ-ಔಷಧಿಗಳು; ೧೦೬ ಮದ್ದ ಅವಾಂತರ; ೧೦೭ ಜಗತ್ತಿನ ವಿಜ್ಞಾನಿಗಳು; ೧೦೮ ನಮ್ಮ ದೇಶ; ೧೦೯ ಗ್ರಾಮ ಸ್ವಾತಂತ್ರ್ಯ. ೧೧೦. ನಮ್ಮ ಕನ್ನಡನಾಡು. ೧೧೧. ಭಕ್ತ ಧ್ರುವ (ಏಕಾಂಕ ನಾಟಕ).

*ಈ ಗುರುತು ಹಾಕಿದ ಪುಸ್ತಕಗಳ ಪ್ರತಿಗಳು ಮುಗಿದಿವೆ.

# ಭಕ್ತ ಧ್ರುವ

## ದೃಶ್ಯ ೧

(ಸುನೀತಿಯು ದೇವರ ಮುಂದೆ ಹಾಡುತ್ತಿರುವಳು. ಹಾಡಿನ ಕೊನೆಗೆ ಧ್ರುವನು ಪ್ರವೇಶಿಸುವನು.)

ಧ್ರುವ: (ಓಡುತ್ತ ಬಂದು) ಅಮ್ಮಾ........ಅಮ್ಮಾ........

ಸುನೀತಿ: (ಆತುರದಿಂದ ಎದ್ದು ಬಂದು) ಕಂದಾ, ಬಂದೆಯಾ? ಬಾಯಾರಿಕೆಯಾಗುತ್ತಿದೆಯೋ? ಹಾಲು ಕೊಡಲೇ?

ಧ್ರುವ: ಅಮ್ಮಾ...

ಸುನೀತಿ: ಏನು ಮಗೂ? (ಮುಖನೋಡಿ) ನಿನ್ನ ಮುಖವೇಕೆ ಬಾಡಿಹೋಗಿದೆ? ಕಣ್ಣುಗಳೇಕೆ ಕೆಂಪಾಗಿವೆ? ಏನಾಯಿತು ಕಂದ? ಯಾರಾದರೂ ಹೊಡೆದರೇ?

ಧ್ರುವ: ಇಲ್ಲ ಅಮ್ಮಾ.

ಸುನೀತಿ: ಮತ್ತೇನಾಯಿತು ಮಗು?

ಧ್ರುವ: (ಶಂಕಿಸುತ್ತ) ಅಮ್ಮಾ....ನಾನೊಂದು ವಿಷಯ ಕೇಳಲೆ?

ಸುನೀತಿ: ಕೇಳು ಮಗು.

ಧ್ರುವ: ಅಮ್ಮ; ನನ್ನ ಅಪ್ಪನಾರು? ಅವನೆಲ್ಲಿರುವನು?

ಸುನೀತಿ: (ನಿಸ್ತೇಜಳಾಗಿ) ಏಕೆ ಮಗು, ಈಗ ಈ ಪ್ರಶ್ನೆ!

ಧ್ರುವ: ಬೇಕಮ್ಮ. ನನ್ನನ್ನು ತಂದೆಯಿಲ್ಲದವನೆಂದು ಚೆನ್ನ, ಚೆಲುವ, ಗೋವಿಂದ, ವೆಂಕಟ ಇವರೆಲ್ಲರೂ ಗೇಲಿಮಾಡುತ್ತಾರಮ್ಮ.

ಸುನೀತಿ: (ಕಣ್ಣೊರಸುತ್ತ) ಆ ವಿಷಯ ಈಗ ಬೇಡ ಕಂದ.

ಧ್ರುವ: ಹಾಗಾದರೆ ನನಗೆ ತಂದೆಯಿಲ್ಲವೆ? ಚೆನ್ನನು ಹೇಳಿದ ಮಾತು ನಿಜವೆ?

ಸುನೀತಿ: ಛೇ! ಇದೆಂತಹ ಮಾತು ಮಗೂ! ಹಾಗೆಂದು ಯಾರು ಹೇಳುವರು? ನಿನ್ನ ತಂದೆಯು ಸಾಮಾನ್ಯನಲ್ಲ. ಈ ದೇಶವನ್ನು ಆಳುತ್ತಿರುವ ರಾಜನೇ ನಿನ್ನ ತಂದೆ. ತಿಳಿಯಿತೆ?

ಧ್ರುವ: (ಆಶ್ಚರ್ಯದಿಂದ) ಹಾಂ! ಇದು ನಿಜವೇನಮ್ಮ! ಹಾಗಾದರೆ ಅವನೇಕೆ ನಮ್ಮನ್ನು ಈ ರೀತಿಯಲ್ಲಿ ಕಾಣುತ್ತಿರುವನು? ನಾವು ಅಲ್ಲಿಗೇಕೆ ಹೋಗಿರುವುದಿಲ್ಲ? ಅಪನಿಗೆ ನಮ್ಮಮೇಲೆ ಕೋಪವೇನಮ್ಮ?

ಸುನೀತಿ: ಹೌದು ಮಗು, ನಿನ್ನ ತಂದೆಗೆ ಇನ್ನೊಬ್ಬಳು ಹೆಂಡತಿ ಯಿರುವಳು. ಅವಳ ದೆಸೆಯಿಂದಾಗಿ ನಮಗೀ ಗತಿ ಪ್ರಾಪ್ತವಾಯಿತು ಚಿಣ್ಣ.

ಧ್ರುವ: ನನ್ನಲ್ಲಿ ಈ ವಿಷಯವನ್ನು ಏಕಮ್ಮ ಇಷ್ಟುದಿನ ಬಚ್ಚಿಟ್ಟಿರುವೆ? ನಾವಿಂಥ ಭಾಗ್ಯಶಾಲಿಗಳಾಗಿದ್ದೂ ಹೇಗೆ ನಿರ್ಭಾಗ್ಯರಂತಿದ್ದೇವೆ! ಇನ್ನು ಸಹಿಸೆನಮ್ಮ ಈ ಅನ್ಯಾಯವನ್ನು. ನಾನೀಗಲೆ ಅಪ್ಪನಲ್ಲಿಗೆ ಹೋಗಿ ನಮ್ಮನ್ನು ಈ ತೆರನಾಗಿ ಕಾಣಬಾರದೆಂದೂ, ಅರಮನೆಗೆ ನಮ್ಮನ್ನು ಕರೆಸಿಕೊಳ್ಳ ಬೇಕೆಂದೂ ಹೇಳಿಬರುವೆನು.

ಸುನೀತಿ: ಬೇಡ ಮಗು! ಹಾಗೆ ಮಾಡಬೇಡ. ಅದರಿಂದ ನಿನ್ನಪ್ಪ ನಿಗೆ ಉಭಯತರ ಕಷ್ಟವಾದೀತು. ಅಲ್ಲಿ ನಿನ್ನ ಮಲತಾಯಿಯಿರುವಳು. ಅವಳು ನಿನ್ನನ್ನು ಮೆಚ್ಚಲಾರಳು.

ಧ್ರುವ: ಹಾಗೇನೂ ಆಗಲಾರದಮ್ಮ. ನನಗೆ ಅಪ್ಪನನ್ನು ಇಂದೇ ಕಾಣಬೇಕು.

ಸುನೀತಿ: ಬೇಡ ಮಗು....

ಧ್ರುವ: ಅದಾಗದಮ್ಮ. ನಾನೀಗಲೇ ಬರುವೆನು (ಓಡುವನು).

ಸುನೀತಿ: (ಹೋದ ದಾರಿಯನ್ನು ನೋಡುತ್ತ) ಬೇಡ ಕಂದ........

(ತೆರೆ)

## ದೃಶ್ಯ ೨

(ಉತ್ತಾನಪಾದರಾಜನ ಅರಮನೆಯ ಅಂತಃಪುರ. ಉತ್ತಾನಪಾದನು ಸುರುಚಿ–ಉತ್ತಮರೊಡನೆ ಕುಳ್ಳಿರುವನು.)

ಉತ್ತಾನಪಾದ: ಪ್ರಿಯೆ! ನಿನ್ನ ಅಪೇಕ್ಷೆಯಂತೆ ಇಂದು ಏರ್ಪಡಿಸಿದ ನರ್ತನದ ಬಗ್ಗೆ ನಿನ್ನ ಅಭಿಪ್ರಾಯವೇನು? ನಿನಗೆ ಮೆಚ್ಚುಗೆಯಾಗಿದೆ ತಾನೆ?

ಸುರುಚಿ: ನೃತ್ಯವು ಅಮೋಘವಾಗಿತ್ತು. ಆಕೆಯು ನಿಜವಾಗಿಯೂ ಹುಟ್ಟು ಕಲಾವಿದೆಯೇ ಸರಿ. ತಾಳ–ಭಾವಗಳಿಗೆ ಹೊಂದಿಕೊಂಡು ಹೇಗೆ ರಸವತ್ತಾಗಿ ನರ್ತಿಸಿದಳು! ಭಾವಭಂಗಿಯೂ ಚೆನ್ನಾಗಿತ್ತಲ್ಲವೆ?

ಉತ್ತಾನಪಾದ: ಹೌದು! ಶಿವನ ತಪೋಭಂಗವಾಗುವ ಆ ಸನ್ನಿವೇಶವು ನಿಜವಾಗಿಯೂ ಶ್ಲಾಘನೀಯವಾಗಿತ್ತು. ಅವಳ ಆಗಿನ ಮುಖಭಂಗಿಯನ್ನು ಕಂಡು ನಮ್ಮ ಉತ್ತಮನು ನಿಜವಾಗಿಯೂ ಹೆದರಿಬಿಟ್ಟಿದ್ದನು. (ಉತ್ತಮನ ಕಡೆ ತಿರುಗಿ) ಅಲ್ಲವೇ ಮುದ್ದು? (ಗಲ್ಲಹಿಡಿದಲುಗಾಡಿಸುವನು).

ಉತ್ತಮ: ಅಪ್ಪ! ಅವಳು ಹಾಗೆ ಕುಣಿಯುವಾಗ ಅವಳಿಗೆ ಕಾಲು ನೋಯುವುದಿಲ್ಲವೆ?

ಉತ್ತಾನಪಾದ: ಇಲ್ಲ ಮಗು. ನೀನು ಆಡುತ್ತಿರುವಾಗ ನಿನಗೆ ಆಯಾಸವಾಗುವುದು ತಿಳಿಯುತ್ತಿದೆಯೆ? ಬದಲು ಸಂತೋಷವಾಗುತ್ತಿದೆ.

ಉತ್ತಮ: ನನಗೂ ಹಾಗೆಯೇ ಕುಣಿಯಬೇಕೆಂದು ಆಶೆಯಾಗುತ್ತಿದೆಯಪ್ಪ.

ಉತ್ತಾನಪಾದ: (ಉತ್ತಮನ ಗಲ್ಲಹಿಡಿದೆತ್ತಿ) ನೀನು ಕುಣಿಯುವುದಲ್ಲ ಚಿಣ್ಣ. ಸಿಂಹಾಸನದಲ್ಲಿ ಕುಳಿತು, ಕುಣಿಸುವುದು; ತಿಳಿಯಿತೆ?

ಧ್ರುವ: (ಪ್ರವೇಶಿಸುತ್ತ) ಅಪ್ಪಾ!....ಅಪ್ಪಾ....!

ಉತ್ತಾನಪಾದ: (ತಲೆಯೆತ್ತಿ ಬಾಗಿಲ ಕಡೆ ನೋಡಿ) ಯಾರದು? ಧ್ರುವನೇ! ಬಾ ಮಗು. ಒಳ್ಳೆ ಸಮಯದಲ್ಲಿಯೇ ಬಂದಿರುವೆ. (ಧ್ರುವನನ್ನು ಎತ್ತಿ ತೊಡೆಯ ಮೇಲೆ ಕುಳ್ಳಿರಿಸುವನು.)

ಸುರುಚಿ: (ಸಿಟ್ಟಿನಿಂದ ಮುಂದೆ ಬಂದು) ಛೀ! ನಾಚಿಕೆಯಾಗುವುದಿಲ್ಲವೆ ನಿಮಗೆ? (ಧ್ರುವನ ಕಡೆ ತಿರುಗಿ ಅವನನ್ನು ಹಿಡಿದೆಳೆದು) ಎಲೊ ಪೋರ! ಎಲ್ಲಿಗೆ ಬಂದು, ಯಾವ ಸ್ಥಾನದಲ್ಲಿ ಕುಳಿತುಕೊಂಡಿರುವೆ? ನಿನ್ನ ಉದ್ಧಟತನವೇ?

ಧ್ರುವ: ಚಿಕ್ಕಮ್ಮ....

ಸುರುಚಿ: ಮುಚ್ಚು ಬಾಯಿ! ಚಿಕ್ಕಮ್ಮನಂತೆ ಚಿಕ್ಕಮ್ಮ! ಯಾರೊ ನಿನಗೆ ಚಿಕ್ಕಮ್ಮ?

ಧ್ರುವ: ಏಕಮ್ಮ ನನ್ನನ್ನು ಜೆದರಿಸುತ್ತೀರಿ? ನೀವು ಅಲ್ಲಗಳೆದರೂ ಲೋಕವು ನೀವು ನನ್ನ ಚಿಕ್ಕಮ್ಮನೆಂದೂ, ನಾನು ನಿಮ್ಮ ಮಲಮಗನೆಂದೂ ಗುರುತಿಸದಿರುವುದೆ? ಇಂದು ಉತ್ತಮನೊಡನೆ ಆಡಿದಂತೆ ಮುದ್ದು ಮಾಡ್ದಾಗಿ ನನ್ನೊಡನೆಯೂ ಮಾತನಾಡಲಾರಿರಾ? ನನ್ನ ಅಮ್ಮನನ್ನೂ ನನ್ನನ್ನೂ ಏಕೆ ದೂರೀಕರಿಸಿರುವಿರಿ? ನಾವು ಏನು ಅನ್ಯಾಯಮಾಡಿರುವೆವು? ಅರಿಯದೆ

ಅಮ್ಮನಿಂದೇನಾದರೂ ಪ್ರಮಾದವಾದುದಿದ್ದರೆ ಅದನ್ನು ಕ್ಷಮಿಸುವಷ್ಟು ಉದಾರತೆಯೂ ನಿಮ್ಮಲ್ಲಿಲ್ಲವೆ? ಅಪ್ಪಾ! ಏಕೆ ಸುಮ್ಮನಿರುವಿರಿ? ಇನ್ನಾದರೂ ನಮ್ಮನ್ನು ಇಲ್ಲಿಗೆ ಕರೆಸಿಕೊಳ್ಳುವಿರಾ? ಉತ್ತಮನ ಜೊತೆಯಲ್ಲಿ ತಮ್ಮ ತೊಡೆಯನ್ನೇರಲು ನನಗೂ ಅಧಿಕಾರವಿಲ್ಲವೆ?

ಸುರುಚಿ: (ಸಿಟ್ಟಿನಿಂದ ಮುಂದೆ ಬಂದು ಧ್ರುವನನ್ನು ಹಿಡಿದೆಳೆದು ಕೆಡವಿ) ಛೀ ದರಿದ್ರ! ಮೂರ್ಖ! ಬಾಯಿಗೆ ಬಂದಂತೆಲ್ಲ ಒದರುವೆಯ? ಎಲ್ಲಿಲ್ಲೊ ಬಿಕ್ಕೆ ಬೇಡುತ್ತಿರುವ ತಿರುಕುಳಿ! ನನ್ನ ಕಂದಮ್ಮನ ಸಮಾನ ಸ್ಥಾನ ಬಯಸುವಿಯ? ಉತ್ತಮನ ಜೊತೆಯಲ್ಲಿ ಸಿಂಹಾಸನವನ್ನೇರುವ ಯೋಗ್ಯತೆಯು ನಿನಗೆಲ್ಲಿ? ಕುನ್ನಿಯು ಸಿಂಹನ ಸರಿಸಾಟಿಯಾಗಬಲ್ಲುದೆ? ನೀನು ದೇವರಲ್ಲಿ ಅಂಥ ಭಾಗ್ಯವನ್ನು ಪಡೆದುಬಂದಿಲ್ಲ. ಪಡೆದುಬಂದಿದ್ದರೆ ನನ್ನ ಬಸಿರಲ್ಲಿ ಹುಟ್ಟಿಬರುತ್ತಿದ್ದೆ. ಆದರೆ, ಸುನೀತಿಯ ಹೊಟ್ಟೆಯಲ್ಲಿ ಹುಟ್ಟಿ ಆ ಭಾಗ್ಯವನ್ನು ಕಳಕೊಂಡೆ. ಸುಮ್ಮನೆ ಏಕೆ ಒದರುತ್ತಿರುವೆ? ನಿನಗೆ ಹಾಗೆ ಸಿಂಹಾಸನವೇರುವ ಉತ್ಕಟೇಚ್ಛೆಯಿದ್ದರೆ ತಪಸ್ಸು ಮಾಡಿ ದೇವರನ್ನು ಒಲಿಸಿ, ನನ್ನ ಹೊಟ್ಟೆಯಲ್ಲಿ ಮರಳಿ ಹುಟ್ಟಿಬರುವಂತೆ ವರವನ್ನು ಪಡೆದು, ನಿನ್ನ ಇಷ್ಟಾರ್ಥವನ್ನು ಈಡೇರಿಸಿಕೊ. ನಡೆ! ಇನ್ನು ಇಲ್ಲಿ ಸುಮ್ಮನೆ ತಲೆಹರಟೆಮಾಡಬೇಡ. (ದೂಡುವಳು).

ಧ್ರುವ: ಅಪ್ಪಾ! ಈ ಮರ್ಮಭೇದಕ ಮಾತುಗಳನ್ನು ಕೇಳಿಯೂ ಸುಮ್ಮನಿರುವಿರೇಕೆ? ಒಂದೇ ಒಂದು ಮಾತನ್ನಾದರೂ ಆಡಲಾರಿರಿ?

ಸುರುಚಿ: ನಡೆಯುವೆಯೊ ಇಲ್ಲವೊ? (ದೂಡುವಳು).

ಧ್ರುವ: ಅಪ್ಪಾ!....ಅಪ್ಪಾ!!....

(ತೆರೆ)

## ದೃಶ್ಯ ೩

(ಸುನೀತಿಯ ಮನೆ)

ಧ್ರುವ: (ದುಃಖದಿಂದ) ಅಮ್ಮಾ....

ಸುನೀತಿ: (ಸಂತಸದಿಂದ ಎದ್ದು ಬಂದು) ಬಂದೆಯಾ, ಚಿಣ್ಣಾ' ಏಕೆ ಅಳುತ್ತಿರುವೆ? ಅರಮನೆಯಲ್ಲಿ ನಿನಗೆ ಅಪಮಾನವಾಯಿತೇ?

ಧ್ರುವ: (ಅಳುತ್ತ) ಅಮ್ಮಾ, ಹೆತ್ತ ತಾಯಿಯಾದ ನಿನ್ನ ಮಾತು ಮೀರಿ ಹೋದ ಎನಗೆ ತಕ್ಕ ಶಾಸ್ತಿಯಾಯಿತಮ್ಮಾ

ಸುನೀತಿ: ಏನು ಮಗು, ಸಮಾಚಾರವೇನು? ಅರಮನೆಯಲ್ಲಿ ಯಾರು ಏನೆಂದರು? ಯಾರಾದರೂ ಹೊಡೆದರೆ ನನ್ನ ಕಂದಮ್ಮನಿಗೆ?

ಧ್ರುವ: ಹೊಡೆತವನ್ನಾದರೂ ತಿಂದು ಸಹಿಸುತ್ತಿದ್ದೆನಮ್ಮಾ, ಆದರೆ ಮರ್ಮಭೇದಕವಾದ, ನಿಂದಾಸ್ಪದವಾದ ಮಾತುಗಳಿಂದ ನನ್ನನ್ನು ಘಾಸಿಗೊಳಿಸಿದಳಮ್ಮಾ ನನ್ನ ಮಲತಾಯಿ. ಹೃದಯವೇ ಇಲ್ಲದವರಂತೆ ಘರ್ಜಿಸಿ ನನ್ನನ್ನೂ ನಿನ್ನನ್ನೂ ಏಕಕಾಲದಲ್ಲಿಯೇ ನಿಂದಿಸಿದರಮ್ಮಾ

ಸುನೀತಿ: (ಮೈದಡವುತ್ತ) ಮರುಗಬೇಡ ಕಂದ. ನಾವು ನಿಂದಕರ ಬಾಯಿಯನ್ನು ಹೇಗೆ ಕಟ್ಟಲಿ? ನಮ್ಮ ಸತ್ಯವೇ ನಮ್ಮ ಬಲವಾಗಿದೆ. ಸನ್ನಡತೆಯುವರನ್ನು ದೇವರೇ ರಕ್ಷಿಸುವನು.

ಧ್ರುವ: (ಕುತೂಹಲದಿಂದ) ದೇವರೆಂದರೇನಮ್ಮಾ?

ಸುನೀತಿ: ಮಗೂ! ದೇವರು ಎಲ್ಲೆಲ್ಲಿಯೂ ಇರುವನು. ಅವನು ಸರ್ವವ್ಯಾಪಿಯು. ನಿನ್ನಲ್ಲಿಯೂ, ನನ್ನಲ್ಲಿಯೂ, ಅಣುರೇಣುತೃಣಕಾಷ್ಠಗಳಲ್ಲಿಯೂ ಆತನಿರುವನು. ಅವನೇ ಈ ಜಗತ್ತನ್ನು ನಡೆಸುತ್ತಿರುವ ಸೂತ್ರಧಾರನು.

ಧ್ರುವ: ಹಾಗಾದರೆ ಅವನೇಕಮ್ಮಾ ನಮಗೆ ಕಾಣಿಸುತ್ತಿಲ್ಲ? ನಿನಗೆ ಕಾಣಿಸುತ್ತಿರುವನೆ?

ಸುನೀತಿ: ಮಗೂ, ಅರಿಷಡ್ವೈರಿಗಳಿಂದ ತುಂಬಿದ ನಮಗೆ, ನಮ್ಮ ಬಾಹ್ಯನೇತ್ರಗಳಿಗೆ ಆತನು ಕಾಣಸಿಗಲಾರನು. ನಮ್ಮ ಮನೋನಯನದಲ್ಲಿ ಆತನ ಮೂರ್ತಿಯನ್ನು ಕಲ್ಪಿಸಿ ಕಾಣಬಹುದು. ಎಷ್ಟೋ ಮುನಿಯೋಗಿಗಳು ಮುಕ್ತಿಯನ್ನು ಪಡೆಯಲೋಸುಗ ಇಹಸುಖವನ್ನು ತೊರೆದು ಕಾಡಿಗೆ ಹೋಗಿ, ತಪಸ್ಸುಮಾಡಿ ಅವನನ್ನು ಕಾಣಲಿಚ್ಛಿಸುತ್ತಾರೆ.

ಧ್ರುವ: ತಪಸ್ಸುಮಾಡಲು ಕಾಡಿಗೇಕಮ್ಮಾ ಹೋಗಬೇಕು?

ಸುನೀತಿ: ಕುವರ, ತಪಸ್ಸುಮಾಡಿ ದೇವರನ್ನು ಒಲಿಸಿಕೊಳ್ಳುವುದೆಂದರೆ ಸಾಮಾನ್ಯವೇ? ಮನಸ್ಸು ಏಕಾಗ್ರತೆಯಿಂದ ಅವನಲ್ಲಿಯೇ ಕೇಂದ್ರೀಕರಿಸಲ್ಪಡಬೇಕು. ನಿಷ್ಠೆಯಿಂದ ಅನುಷ್ಠಾನವನ್ನೆಸಗಬೇಕು.

ಇದಕ್ಕೆ ಶಾಂತ ವಾತಾವರಣ ಬೇಕು. ಅದು ಕಾಡಿನಲ್ಲಿಯೇ ಲಭಿಸ ಬಲ್ಲದು.

ಧ್ರುವ: ತಪಸ್ಸುಮಾಡಿದರೆ ದೇವರು ಒಲಿಯುವನೇನಮ್ಮ?

ಸುನೀತಿ: ಅಹುದು ಕಂದ. ಅವನೊಲಿವನು; ಪೊರೆವನು.

ಧ್ರುವ: ಹಾಗಾದರೆ ಎಲ್ಲರೂ ತಪಸ್ಸುಮಾಡಿ ಆತನನ್ನು ಒಲಿಸಿ ಕೊಳ್ಳಬಾರದೇಕೆ?

ಸುನೀತಿ: ನಿನ್ನ ಪ್ರಶ್ನೆಗೆ ನಾನು ಉತ್ತರಕೊಡಲಾರೆ. ಎಲ್ಲರೂ ಪರಮಾತ್ಮನ ಭಕ್ತರಾದರೆ—ಈ ಜಗತ್ತೇ ಸ್ವರ್ಗ.

ಧ್ರುವ: ಅಮ್ಮಾ.......ನಾನೂ ಅವನನ್ನು ತಪಸ್ಸುಮಾಡಿ ಒಲಿಸಿ ಕೊಳ್ಳುವೆನು. ಅವನನ್ನು ಒಲಿಸಿ, ನನ್ನ ತಾಯಿಯು ರಾಜಮಾತೆಯಾಗು ವಂತೆ, ನಾನು ಅಪ್ಪನ ತೊಡೆಯೇರಿ ಕುಳಿತುಕೊಳ್ಳುವಂತೆಯೂ ವರ ಪಡೆವೆನು.

ಸುನೀತಿ: ಇದೇನು ಮಾತು ಕಂದ? ನೀನು ಅವನನ್ನು ಒಲಿಸಿ ಕೊಳ್ಳುವುದೆಂದರೇನು? ಹಾಗೆ ಮಾತಾಡಬೇಡ.

ಧ್ರುವ: ಅಮ್ಮಾ ನನಗೆ ಪರಮಾತ್ಮನನ್ನು ಕಾಣಲೇ ಬೇಕು.

ಸುನೀತಿ: ಕಾಡಿನಲ್ಲಿ ಘೋರ ಮೃಗಗಳಿವೆ. ಅವುಗಳ ಮಧ್ಯೆ ನೀನೆಂತು ಜೀವ ಹಿಡಿದಿರಬಲ್ಲೆ? ನಿನಗೆ ಅಂಜಿಕೆಯಾಗಲಾರದೆ? ನಿನ್ನನ್ನು ಬಿಟ್ಟಿರಲು ನನಗೆ ಸಾಧ್ಯವೆ?

ಧ್ರುವ: ಅಮ್ಮಾ! ಪರಮಾತ್ಮನೇ ಪೊರೆಯುವನೆಂದು ಹೇಳಿದೆಯಲ್ಲವೆ? ನನ್ನನ್ನೂ ನಿನ್ನನ್ನೂ ಪೊರೆಯುವ ಭಾರವು ಅವನದಲ್ಲವೇನಮ್ಮ? ದೇವ ರನ್ನು ಕಂಡಬಳಿಕ ಒಂದರೆನಿಮಿಷವನ್ನಾದರೂ ನಿನ್ನನ್ನು ಬಿಟ್ಟಿರಲಾರೆನು, ಓಡೋಡಿ ಬಂದು, ನಿನ್ನನ್ನು ಸೇರುವೆನು.

ಸುನೀತಿ: ಚಿಣ್ಣಾ! ಕಾಡಿನಲ್ಲಿ ನಿನಗೆ ಅನ್ನ-ಆಹಾರಾದಿಗಳನ್ನು ಒದಗಿ ಸುವವರಾರು? ಅಲ್ಲದೆ ಅಲ್ಲಿನ ಕಲ್ಲುಮುಳ್ಳುಗಳ ತುಳಿತವನ್ನು ನೀನೆಂತು ಸೈರಿಸುವೆ?

ಧ್ರುವ: ಅಮ್ಮಾ! ಅದೆಲ್ಲವನ್ನು ನಾನು ತಿಳಿಯೆ. ನನಗೆ ಅನ್ನ ಆಹಾರಗಳು ಬೇಡ. ಅವನನ್ನು ಕಾಣಲೇ ಬೇಕು! ಇದೋ— ಹೋಟೆ. (ಹೊರಟುಹೋಗುವನು.)

ಸುನೀತಿ: ಅಯ್ಯೋ ಕಂದ! ನಿನಗೇಕೆ ಈ ಬುದ್ಧಿ ಬಂತು? ಹಾಯ್! ನಾನಿನ್ನು ಹೇಗೆ ಜೀವಿಸಲಿ? ದೈವವೇ! (ಎನ್ನುತ್ತ ಮೂರ್ಛೆಹೋಗುವಳು.)

(ತೆರೆ.)

## ದೃಶ್ಯ ೪

(ಅರಮನೆ. ಉತ್ತಾನಪಾದರಾಜನು ವ್ಯಸನಾಕ್ರಾಂತನಾಗಿ ಶಥಪಥ ತಿರುಗುತ್ತಿರುವನು.)

ಉತ್ತಾನಪಾದ: ಅಯ್ಯೋ! ನಾನೆಂಥ ನಿರ್ದಯಿಯು........ನಾನೆಂಥ ಪಾಪಾತ್ಮ! ನಿರಪರಾಧಿ ಬಾಲಕನು ಬಂದು ಎತ್ತಿಕೋ ಎಂದು ದೈನ್ಯದಿಂದ, ಹೃದಯವೇ ಕರಗಿ ನೀರಾಗುವಂತೆ ಕೇಳಿಕೊಂಡಾಗ ಅವನಲ್ಲಿ ಒಂದೇ ಮುದ್ದು ಮಾತನ್ನಾದರೂ ಆಡಲಾರದೆ ಹೋದೆನೆ? (ತಲೆಗೆ ಕೈಹೊತ್ತು, ಚಿಂತಿಸಿ, ಕ್ಷಣಕಾಲ ತಡೆದು, ಪುನಃ ತಲೆಯೆತ್ತಿ) ಅಯ್ಯೋ! ನಾನೇಕೆ ಹೀಗೆ ದಿನದಿಂದ ದಿನೇ ಸತ್ವಹೀನನಾಗುತ್ತಲಿದ್ದೇನೆ? ನಿರಪರಾಧಿಗಳಾದ ಧ್ರುವ—ಸುನೀತಿಯರನ್ನು, ಸುರುಚಿಯ ಮಾತು ಕೇಳಿ ಅರಮನೆಯಿಂದ ಹೊರ ದಬ್ಬಿದೆನು. ಕಷ್ಟಗಳಿಗೆ ತಳ್ಳಿದೆನು. ಅದನ್ನರಿಯದೆ ಹಸುಳೆ ಧ್ರುವನು ಬಂದು ಪರಿಪರಿಯಾಗಿ ನನ್ನೊಡನೆ ಕೇಳಿಕೊಳ್ಳುತ್ತಿರುವಾಗ, ನನ್ನ ಕಣ್ಣೆದುರಲ್ಲಿಯೇ ಸುರುಚಿಯು ಅವನನ್ನು ಹೀನಾಯವಾಗಿ ಬೈದು ಭಂಗಿಸಿದಳಲ್ಲವೆ? ಅವನೂ ನನ್ನ ಕರುಳಲ್ಲವೆ? ಅದನ್ನು ನೋಡಿಯೂ ತೆಪ್ಪಗಿದ್ದ ನನ್ನ ರಾಜತನಕ್ಕೆ ಧಿಕ್ಕಾರವಿರಲಿ! (ಏನನ್ನೊ ಸ್ಮರಿಸಿ) ಇಲ್ಲ! ಈ ಅನ್ಯಾಯವನ್ನು ಇನ್ನು ನಡೆಯಗೊಡಬಾರದು. ನನ್ನ ತಪ್ಪನ್ನು ಒಪ್ಪಿಕೊಂಡಾದರೂ ಸುನೀತಿ—ಧ್ರುವರನ್ನು ಮರಳಿ ಪಡೆಯಲೇ ಬೇಕು.

ಮಂತ್ರಿ: (ಪ್ರವೇಶಿಸಿ, ವಂದಿಸಿ) ಪ್ರಭೋ!

ರಾಜ: (ಸಿಟ್ಟಿನಿಂದ) ಯಾರು? ಏಕೆ ಬಂದೆ?

ಮಂತ್ರಿ: (ವಿನಯದಿಂದ ಬಾಗಿ) ಮಹಾಪ್ರಭೋ! ಧ್ರುವನು ದೇವರನ್ನು ಒಲಿಸಿಕೊಳ್ಳಲೆಂದು ಕಾಡಿಗೆ ಹೋಗಿರುವನಂತೆ. ನಗರದಲ್ಲೆಲ್ಲ ಅದೇ ಮಾತನ್ನು ಆಡಿಕೊಳ್ಳುತ್ತಿರುವರು. ಅದನ್ನು ತಮ್ಮಲ್ಲಿ ಅರಿಕೆಮಾಡಿಕೊಳ್ಳಲು ಬಂದಿರುವೆನು.

ಉತ್ಥಾನಪಾದ: (ಆಶ್ಚರ್ಯದಿಂದ) ಏನು, ಧ್ರುವನು ಕಾಡಿಗೆ ಹೋದನೇ?

ಮಂತ್ರಿ: ಅಹುದು ಪ್ರಭೋ! ನಮ್ಮ ಆಂತರಿಕ ವಲಯದಿಂದಲೇ ಈ ಸುದ್ದಿಯು ತಿಳಿಯಬಂದಿತು.

ಉತ್ಥಾನಪಾದ: ಹಾ! ಕಂದ!! ನಿನ್ನನ್ನು ನನ್ನ ಕೈಯಾರ ಕಳಕೊಂಡೆನೆ? ನನ್ನ ಹೊಟ್ಟೆಯಲ್ಲಿ ಹುಟ್ಟಿ ರಾಜಾಸನದಲ್ಲಿ ಕುಳ್ಳಿರಬೇಕಾದ ನೀನು ಅಡವಿಪಾಲಾದೆಯಾ? ಹಾ! ವಿಧಿಯೇ! ಇದೆಂತಹ ಕ್ರೂರ ವಿಡಂಬನೆ! (ಮಂತ್ರಿಯ ಕಡೆ ತಿರುಗಿ) ಮಂತ್ರಿವರ್ಯ, ನಾವಿಗಲೇ ಅವನನ್ನು ಹುಡುಕಿ, ಮರಳಿ ಕರೆದುತರಬೇಕು. ಅದಕ್ಕೆ ಬೇಕಾದ ಸಿದ್ಧತೆಗಳನ್ನು ಮಾಡು, ನಡೆ.

ಮಂತ್ರಿ: ಅಪ್ಪಣೆ ಪ್ರಭೋ!

(ತೆರೆ)

## ದೃಶ್ಯ ೫

(ಕಾಡು. ರಾಜ, ಮಂತ್ರಿ ಮತ್ತು ಪರಿವಾರದವರ ಪ್ರವೇಶ.)

ಉತ್ಥಾನಪಾದ: (ಪ್ರವೇಶಿಸುತ್ತ) ಅಮಾತ್ಯವರ್ಯ, ಸಾಮಾನ್ಯ ತರವಾದ ಈ ಎಲ್ಲ ಕಾಡುಗಳನ್ನು ಹುಡುಕಿ ನಿರಾಶರಾದೆವು. ಇನ್ನುಳಿದಿರುವುದೊಂದೆ ಈ ಘೋರಕಾಡಿನ ಶೋಧ. ಆದರೆ ಈ ಅರಣ್ಯವನ್ನು ಕಾಣುವಾಗಲೇ ಮೈ ಝುಮ್ಮೆನ್ನುತ್ತಲಿದೆ. ಇಲ್ಲಿ ಧ್ರುವನನ್ನು ಎಲ್ಲಿ ಹುಡುಕಲಿ? (ಸುತ್ತುಮುತ್ತು ಈಕ್ಷಿಸಿ) ಅಯ್ಯೋ! ಈ ಘೋರಾರಣ್ಯದಲ್ಲಿ ಇಷ್ಟರಲ್ಲಿಯೇ ದುಷ್ಟ ಮೃಗಗಳ ಬಾಯಿಗೆ............ಅಯ್ಯೋ! (ಸಂಕಟದಿಂದ ತಲೆಗೆ ಕೈಹೊತ್ತು ಕುಳಿತುಕೊಳ್ಳುವನು.)

ಮಂತ್ರಿ: ಪ್ರಭೋ! ತಾವು ಹೀಗೆ ಅಧೀರರಾಗಬಾರದು. ಪರಿವಾರ ಸಹಿತರಾಗಿ ಬಂದ ನಮಗೆ ಧ್ರುವನನ್ನು ಪತ್ತೆಹಚ್ಚುವುದು ಅದೆಷ್ಟರ ಕೆಲಸ? ಅವನ ಪೂಜ್ಯಮಾತೃವಿನ ಸತ್ಯ ಮತ್ತು ಭಕ್ತಿಯು ಅದುತನಕ ಅವನನ್ನು ರಕ್ಷಿಸದಿರಲಾರದು.

ಉತ್ಥಾನಪಾದ: (ಎಡಬಲಗಳ ನೆಲವನ್ನು ಪರೀಕ್ಷಿಸಿ ಸಂತೋಷದಿಂದ) ಮಂತ್ರಿ! ಇದೋ! ಇದೋ!! ಇಲ್ಲಿ ನೋಡು. ಈ ಪೊದರುಗಳೆಡೆ

ಯಲ್ಲಿ ಮನುಷ್ಯರ ಹೆಜ್ಜೆಯ ಗುರುತು ಮೂಡಿರುವುದು ಗೋಚರಿಸುತ್ತಿದೆ ಯಲ್ಲವೆ?

ಮಂತ್ರಿ: ಅದೆಲ್ಲಿಂದಲೋ ದೇವರನಾಮ ಹಾಡುತ್ತಿರುವುದು ಅಸ್ಪಷ್ಟವಾಗಿ ಕೇಳಿಸುತ್ತಲಿದೆ.

ಉತ್ತಾನಪಾದ: (ಆಲಿಸಿ ಸಂತೋಷದಿಂದ) ಹೌದು! ಹೌದು!! ಅತನದೇ ಧ್ವನಿಯು! ಸಂಶಯವಿಲ್ಲ. ಆ ಧ್ವನಿಯನ್ನನುಸರಿಸಿ ಹೋಗೋಣ. (ಹೋಗುವರು. ಇನ್ನೊಂದು ಬದಿಯಿಂದ ಧ್ರುವನು ದೇವರನಾಮ ಹಾಡುತ್ತ ಬರುವನು.)

ಧ್ರುವ: (ಹಾಡಿನ ಕೊನೆಗೆ) ದೇವ! ನೀನೆಲ್ಲಿರುವೆ? ಕಾಡಿನಲ್ಲಿ ನೀನಿರುವೆಯೆಂದು ನಂಬಿ ನಿನ್ನನ್ನರಸುತ್ತ ಬಂದಿರುವೆನು. ನಿನ್ನನ್ನು ಕಂಡಲ್ಲದೆ ನಾನು ಮರಳಿ ಹೋಗಲಾರೆನು. ನಿನ್ನ ಸುಂದರ ಮುಖ ಕಮಲವನ್ನು ತೋರಿಸಿ ನನ್ನ ಮನದಭೀಷ್ಟವನ್ನು ಈಡೇರಿಸಲಾರೆಯಾ?.... (ಸುತ್ತಲೂ ಈಕ್ಷಿಸುವನು. ರಾಜ ಮತ್ತು ಪರಿವಾರದ ಪ್ರವೇಶ.)

ಉತ್ತಾನಪಾದ: (ಓಡಿ ಬಂದು ಧ್ರುವನನ್ನಪ್ಪಿ) ಕಂದ, ಧ್ರುವ........

ಧ್ರುವ: (ಆಶ್ಚರ್ಯದಿಂದ) ಅಪ್ಪಾ!....... .....

ಉತ್ತಾನಪಾದ: ಮಗು, ನನ್ನನ್ನು ಕ್ಷಮಿಸು. ನನ್ನದು ಮಹಾಪರಾಧವಾಯಿತು. ಅದೆಲ್ಲವನ್ನು ಮರೆತು, ನನ್ನೊಡನೆ ಹಿಂದಿರುಗು. ನಿನ್ನನ್ನು ಜರೆದು ನಿಂದಿಸಿದ ನಿನ್ನ ಮಲತಾಯಿಯನ್ನು ನಿನ್ನಿದಿರಲ್ಲೇ ನಿನ್ನಪೇಕ್ಷೆಯಂತೆ ಶಿಕ್ಷಿಸುವೆನು.

ಧ್ರುವ: ಅಪ್ಪಾ! ನೀವು ವೃಥಾ ಕೊರಗಬೇಡಿರಿ. ನಿಮ್ಮಿಂದ ಯಾವ ಅಪರಾಧವೂ ಸಂಭವಿಸಿಲ್ಲ. ಚಿಕ್ಕಮ್ಮನ ಮೇಲೆ ಕೋಪಿಸದಿರಿ. ಅವರೇ ನನ್ನಲ್ಲಿ ತುಂಬಿದ್ದ ಅಜ್ಞಾನವನ್ನು ತೊಡೆದು ಪರಮಾತ್ಮನನ್ನು ಕಾಣುವ ಈ ದಿವ್ಯಪಥ ದರ್ಶಕರು. ಅವರೇ ಆದಿ ಗುರು.

ಉತ್ತಾನಪಾದ: (ಮುದ್ದಿನಿಂದ ಮೈದಡವುತ್ತ) ಎಂಥ ಉದಾತ್ತ ಮಾತುಗಳನ್ನಾಡುತ್ತಿರುವೆ! ಹಸುಗೂಸಾದರೂ ನಿನ್ನ ವಿಚಾರಶಕ್ತಿಯ ಮುಂದೆ ನಾನು ಬರೆ ಅಲ್ಪನೇ ಸರಿ. ನೀನು ಹೇಳಿದುದೆಲ್ಲವನ್ನು ನಾನು ಮನಸಾ ಒಪ್ಪಿಕೊಳ್ಳುವೆನು. ಆದರೆ ದೇವರನ್ನು ಕಾಣಬೇಕೆಂಬ ಆ ನಿನ್ನ ಛಲವನ್ನು ಮಾತ್ರ ಬಿಟ್ಟುಬಿಡು!

ಧ್ರುವ: ಅಪ್ಪಾ, ನನ್ನ ಮನೋಸಿಧ್ಧಾರವನ್ನು ಬದಲಾಯಿಸಲು ಯತ್ನಿಸಬೇಡ.

ಉತ್ತಾನಪಾದ: ಹಾಗೆ ಛಲತೊಡಬೇಡ ಕಂದ. ದೇವರು ಎಂತೆಂತಹ ಮಹಾಮಹಾ ಮುನಿಯೋಗಿಗಳಿಗೂ ಕಾಣಿಸಿಕೊಳ್ಳುತ್ತಿಲ್ಲ. ಹಾಗಿರುವಾಗ ನಿನ್ನಂಥ ಹಸುಳೆಗೆ ಸಿಗುವನೆ?

ಧ್ರುವ: ಅಪ್ಪಾ! ದೇವರಿಗೆ ಹಿರಿಯ, ಕಿರಿಯ, ಬಡವ, ಬಲ್ಲಿದ ಎಂಬ ಭೇದಭಾವಗಳಿವೆಯೇ? ಅವನು ಭಕ್ತಾಧೀನನಲ್ಲವೆ?

ಉತ್ತಾನಪಾದ: ಕಂದಾ, ತರ್ಕಿಸದಿರು. ನನ್ನ ರಾಜ್ಯವನ್ನೂ, ಅರಮನೆಯ ಸಮಸ್ತಕಾರ್ಯಭಾಗಗಳನ್ನೂ ಇಂದೇ ಬೇಕಾದರೂ ನಿನಗೆ ಬಿಟ್ಟುಕೊಡುವೆನು, ಬಾ.

ಧ್ರುವ: ನನಗೆ ರಾಜ್ಯದ, ಅಧಿಕಾರದ, ವ್ಯಾಮೋಹಗಳು ಇಲ್ಲ. ದೇವರನ್ನು ಕಾಣುವ ಉತ್ಕಟೇಚ್ಛೆ ಮಾತ್ರ ನನ್ನ ಮನವನ್ನಾಶ್ರಯಿಸಿರುವುದು. ಅಪ್ಪಾ! ಸರಿಯುತ್ತಿರುವ ಒಂದೊಂದೇ ಕ್ಷಣವೂ ವೃಥಾ ಹರಣವಾಗುತ್ತಿರುವುದನ್ನು ತಡೆಯಲಾರೆನು. ಪೂರ್ಣ ಮನಸ್ಸಿನಿಂದ ನಿಮ್ಮ ಕಂದನಿಗೆ ಆಶೀರ್ವದಿಸಿರಿ! (ಎರಗಿ, ಹೊರಟುಹೋಗುವನು.)

(ತೆರೆ)

## ದೃಶ್ಯ ೬

(ಸುನೀತಿಯ ಮನೆ. ಸುನೀತಿಯೊಬ್ಬಳೇ ಕುಳಿತಿರುವಳು.)

ಸುನೀತಿ: ದೇವ! ದಯಾಮಹಿಮ!! ನಿನ್ನ ಮಹಿಮೆಯು ಅಗಣಿತವಾದುದು. ಸಮಸ್ತ ಜೀವಕೋಟಿಯೂ ನಿನ್ನ ಕೃಪಾಛತ್ರದಡಿಯಲ್ಲಿ ಹಲವು ನಲವುಗಳಿಂದ ನಲಿಯುತ್ತಿರುವುದು. ಏನೂ ಅರಿಯದ ನನ್ನ ಕಂದನನ್ನು ಪೊರೆಯುವ ಭಾರವು ನಿನ್ನದೇ ಆಗಿರುತ್ತದೆ. (ಎದ್ದು ವ್ಯಸನದಿಂದ) ಅಯ್ಯೋ! ಏನೂ ಅರಿಯದ ಹಸುಳೆ ಧ್ರುವನು ಘೋರಾರಣ್ಯದಲ್ಲಿ, ಕ್ರೂರ ಮೃಗಗಳ ಮಧ್ಯೆ, ಹೇಗೆ ಜೀವಹಿಡಿದಿರಬಲ್ಲನು! ಅವನ ಕೋಮಲ ಪಾದಗಳು ಕಾಡಿನ ಕಲ್ಲು,ಮುಳ್ಳು, ಪೊದರುಗಳನ್ನು ಹೇಗೆ ಸಹಿಸಬಲ್ಲವು? ಹಸಿವೆ ಬಾಯಾರಿಕೆಗಳಾದಾಗ ನನ್ನನ್ನು ಸ್ಮರಿಸಿ ಪರಿತಪಿಸಿ "ಅಮ್ಮಾ, ಅಮ್ಮಾ" ಎಂದು, ಅದೆಷ್ಟು ಪರಿಯಾಗಿ ಕೂಗುತ್ತಿರುವನೋ! ನಾನೆಂಥ

ಭಾಗ್ಯಹೀನೆ! ಪತಿಯ ಪ್ರೀತಿಯಿಂದ ಮೊದಲೇ ವಿವಂಚಿತಳಾದೆನು. ಆದರೂ ಕೊನೆಯ ನನ್ನ ಆಶೆ ಆಕಾಂಕ್ಷೆಗಳೆಲ್ಲವನ್ನೂ ನನ್ನ ಕುವರನಲ್ಲಿಟ್ಟು ಅವನನ್ನು ಕಂಡು ಸುಖಿಸುತ್ತಲಿದ್ದೆನು......ಆ ಸುಖವನ್ನು ದೇವರು ನನ್ನಿಂದ ಕಸಿದುಕೊಂಡನಲ್ಲ! ನಾನಿನ್ನು ಯಾವ ಸುಖಕ್ಕಾಗಿ ಬದುಕಿರಲಿ?

ಮೃದುಲ: (ಪ್ರವೇಶಿಸಿ) ಅಮ್ಮಾ............

ಸುನೀತಿ: ಯಾರು?

ಮೃದುಲ: ನಾನಮ್ಮ (ತುಸು ತಡೆದು) ಅಮ್ಮಾ! ಧ್ರುವನು ಕಾಡಿನಲ್ಲಿ ತಪಸ್ಸು ಮಾಡುತ್ತಿರುವನಂತೆ. ಮಹಾರಾಜರು ಎಲ್ಲವನ್ನೂ ಮರೆತು, ತಮ್ಮ ತಪ್ಪನ್ನು ಒಪ್ಪಿಕೊಂಡು ಅವನನ್ನು ಕರೆತರಲು ಹೋಗಿದ್ದರಂತೆ. ಆದರೆ ಧ್ರುವನು ಎಷ್ಟು ಮಾತ್ರಕ್ಕೂ ಹಿಂದಕ್ಕೆ ಬರಲೊಪ್ಪಲಿಲ್ಲವಂತೆ. ತಾನು ದೇವರನ್ನು ಒಲಿಸಿಯೇ ಬರುವುದಾಗಿಯೂ, ಆ ತನಕ ಅಮ್ಮನನ್ನು ಕೊರಗದಂತೆ ನೋಡಿಕೊಂಡಿರಬೇಕಾಗಿಯೂ ವಿನಂತಿಸಿಕೊಂಡನಂತೆ.

ಸುನೀತಿ: (ಸಂತೋಷದಿಂದ) ಹಾ! ನಿಜವೆ? ಮಹಾರಾಜರು ಅವನನ್ನರಸುತ್ತ ಹೋಗಿದ್ದರೆ! ಅವನನ್ನು ಸಂಧಿಸಿಬಂದಿರುವರೇ?

ಮೃದುಲ: ನಿಜ ತಾಯಿ, ಅವರು ಬೇಗನೆ ನಿಮ್ಮನ್ನು ಅರಮನೆಗೂ ಕರೆಸಿಕೊಳ್ಳುತ್ತಾರಂತೆ.

ಸುನೀತಿ: (ಕೈಮುಗಿದು) ದೇವ, ನಿನ್ನ ಭಕ್ತಳ ಪರೀಕ್ಷೆಯು ಕೊನೆಗೊಳ್ಳುತ್ತ ಬಂತೇ? ಈಗಲಾದರೂ ನಮ್ಮೆಡೆಗೆ ನಿನ್ನ ಕೃಪಾದೃಷ್ಟಿಯನ್ನು ಬೀರಿದೆಯ? ನನ್ನ ಕಂದಮ್ಮನಿಗೆ ಏನೊಂದೂ ಕೆಡುಕಾಗದಂತೆ, ಅವನು ಶೀಘ್ರವೇ ಮರಳಿಬರುವಂತೆ ಮಾಡು ದೇವ!

ಮೃದುಲ: ದೇವನು ನಮ್ಮಕೈಬಿಡಲಾರನಮ್ಮ ನೀವು ಚಿಂತಿಸದಿರಿ.

(ತೆರೆ)

## ದೃಶ್ಯ ೭

(ಕಾಡಿನಲ್ಲಿ ಧ್ರುವನು ದೇವರನ್ನು ಅರಸುತ್ತ ಅಂಡಲೆಯುವನು.)

ಧ್ರುವ: (ಹಾಡುತ್ತ ಪ್ರವೇಶಿಸುವನು. ಹಾಡಿನ ಕೊನೆಗೆ) ದೇವ! ನೀನೆಲ್ಲಿರುವೆ? ನೀನು ಭಕ್ತವತ್ಸಲನಲ್ಲವೆ? ನಿನ್ನನ್ನು ಕಾಣುವ ಅಚಲ ನಿರ್ಧಾರದಿಂದ ಹೊರಟಿರುವ ನನಗೆ ನಿನ್ನ ಆ ಸುಂದರ ಮೂರ್ತಿಯನ್ನೊಮ್ಮೆ

ತೋರಿಸಬಾರದೆ? ದೇವ! ನೀನು ಭಕ್ತರಿಗೆ ಎಲ್ಲೆಲ್ಲಿಯೂ ಕಾಣಸಿಗುವಿ ಯೆಂದು ನನ್ನಮ್ಮನು ಹೇಳಿದ ಮಾತು ಸುಳ್ಳಾಯಿತೆ? ದೇವ! ನನ್ನ ಹೃದಯವನ್ನೊಮ್ಮೆ ಪರೀಕ್ಷಿಸಿ ನೋಡು. ನಿನ್ನನ್ನು ಕಂಡಲ್ಲದೆ ನಾನು ಮರಳಿ ಹೋಗುವವನಲ್ಲ. (ಸುತ್ತಲೂ ಈಕ್ಷಿಸುವನು. ದೂರದಿಂದ ಹಾಡುತ್ತ ಬರುತ್ತಿರುವ ನಾರದನನ್ನು ಕಂಡು ದೇವರೇ ಬರುತ್ತಿರುವರೆಂದು ಬಗೆದು) ಅಹೋ! ನನ್ನ ಮೊರೆಯನ್ನು ಕೇಳಿ ದೇವರು ಬರುತ್ತಿರುವಂತಿದೆ. ತಂಬೂರಿಯ ನಿನಾದದೊಡನೆ ಏನೋ ಹಾಡು ಕೇಳಿ ಬರುತ್ತಿದೆಯಲ್ಲ! (ಆಲಿಸಿ) ಓಹೊ, ಅವರು ನಾರಾಯಣ ನಾಮವನ್ನು ಹಾಡುತ್ತಿರುವಂತಿದೆ. ಹಾಗಿದ್ದರೆ ಅವರು ದೇವರಿರಲಾರರು. ನನ್ನ ಹಾಗೆಯೇ ದೇವರನ್ನರಸು ವರರು ಇಲ್ಲವೆ ದೇವರನ್ನು ಕಂಡರಿತವರಿರಬೇಕು. ಯಾರೇ ಆಗಿರಲಿ, ಅವರಿಗೆ ದೇವರ ವಿಚಾರ ಗೊತ್ತಿರಲೂ ಬಹುದು. ಆದುದರಿಂದ ಅವರಲ್ಲಿಗೆ ಹೋಗಿ ವಿಚಾರಿಸುವೆನು. (ಹೋಗುವನು. ನಾರದನು ಇನ್ನೊಂದು ಬದಿಯಿಂದ ನಾರಾಯಣ ನಾಮವನ್ನು ಹಾಡುತ್ತ ಪ್ರವೇಶಿಸುವನು.)

ನಾರದ: (ಸ್ವಗತ)ದಕ್ಷಬ್ರಹ್ಮನಿಂದ ಶಾಪಗ್ರಸ್ತನಾದ ನಾನು ತ್ರಿಭುವನ ಸಂಚಾರಿಯಾಗಿ ಲೋಕಕಲ್ಯಾಣ ಕಾರ್ಯದಲ್ಲಿ ಶ್ರೀಮನ್ನಾರಾಯಣನಿಗೆ ಸಹಾಯ ಮಾಡುತ್ತಲಿದ್ದೇನೆ. ಜನಕೇನೋ "ನಾರದನೋ ಕಲಹ ಪ್ರಿಯ" ಅಂತ ಹೇಳುತ್ತಲಿದ್ದಾರೆ. ಆದರೆ, [illegible] ಕಲಹದ ಪರಿಣಾಮವು ಜನಹಿತ ವಾಗಿ, ಲೋಕಹಿತವಾಗಿ ಪರಿಣಮಿಸುವುದು ನನಗೆ ಬೇಕಾಗಿದೆ. ಇಂದು ಉತ್ತಾನಪಾದರಾಯನ ಪುತ್ರ ಧ್ರುವನು ದೇವರನ್ನು ಕಾಣುವ ಹಂಬಲ ದಿಂದ ಕಾಡಿನಲ್ಲಿ ಅಂಡಲೆಯುತ್ತಿರುವನು. ಅವನು ಆತ್ಮಬಲ ಹಾಗೂ ಭಕ್ತಿಯಿಂದ ಕೂಡಿದವನಿದ್ದರೂ ದೇವರನ್ನು ಸುಲಭದಲ್ಲಿ ಕಾಣುವ ರಹಸ್ಯ ತಿಳಿದವನಲ್ಲ. ಆದುದರಿಂದ ಈಗ ಅವನಲ್ಲಿಗೆ ಹೋಗಿ, ಅವನನ್ನು ಪರೀಕ್ಷಿಸಿ, ಅವನಿಗೆ ಮೂಲಮಂತ್ರವನ್ನು ಬೋಧಿಸಬೇಕಾಗಿದೆ. (ದೂರ ನೋಡಿ) ಅದೋ, ಅವನೇ ಇತ್ತ ಬರುವಂತಿದೆ.

ಧ್ರುವ: (ಪ್ರವೇಶಿಸಿ) ಸ್ವಾಮಿ, ವಂದನೆಗಳು. (ಎರಗುವನು.)

ನಾರದ: (ಆಶೀರ್ವದಿಸಿ) ನಾರಾಯಣ! ನಾರಾಯಣ!!

ಧ್ರುವ: (ಸಂತೋಷದಿಂದ) ಸ್ವಾಮಿ, [illegible] ನಾರಾಯಣನೆಲ್ಲಿರುವನು? ನೀವೂ ಅವನನ್ನೇ ಅರಸುತ್ತಿರುವಿರಾ?

ನಾರದ: ಮಗೂ, ನಾನು ನಾರಾಯಣನನ್ನು ಅರಸುತ್ತಲಿಲ್ಲ. ಅವನ ನಾಮಸ್ಮರಣೆ ಮಾಡುತ್ತ ತಿರುಗುತ್ತಲಿದ್ದೇನೆ.

ಧ್ರುವ: ಪೂಜ್ಯರೆ, ಹಾಗಾದರೆ ನಿಮಗೂ ಅವನನ್ನು ನನಗೆ ತೋರಿಸುವ ಶಕ್ತಿಯಿಲ್ಲವೆ?

ನಾರದ: ಆಡುತ್ತ ಕಾಲಕಳೆಯಬೇಕಾದ ನಿನಗೆ ನಾರಾಯಣನನ್ನು ಕಾಣುವ ಹಂಬಲವೇಕೆ ಮಗು? ನೀನಾರು? ಈ ಅಡವಿಗೇಕೆ ಬಂದೆ? ದಾರಿ ತಪ್ಪಿತೇ?

ಧ್ರುವ: ಇಲ್ಲ ಮಹಾತ್ಮರೆ, ದಾರಿ ತಪ್ಪಿಲ್ಲ. ನಾನು ಉತ್ತಾನಪಾದ ರಾಯನ ಪುತ್ರ ಧ್ರುವನಾಗಿರುತ್ತೇನೆ. ನನ್ನ ಮಲತಾಯಿಯು ಮಾತಿನ ಹತಿಯಿಂದ ನೊಂದು, ಆಕೆಯ ಆದೇಶದಂತೆ ದೇವರನ್ನರಸುತ್ತ ಬಂದಿರುವೆನು. ದಯಮಾಡಿ ಆತನನ್ನು ಒಂದೇ ಒಂದು ಬಾರಿ ನನಗೆ ತೋರಿಸಿಕೊಡುವಿರಾ?

ನಾರದ: ಬಾಲಕ, ದೇವರು ಹಾಗೆಲ್ಲ ಎಲ್ಲರಿಗೂ ಕಾಣಸಿಗಲಾರನು. ದೇವರನ್ನು ಒಲಿಸಿಕೊಳ್ಳುವ ನಾಮಜಪ, ತಪ, ಅನುಷ್ಠಾನ ಮೊದಲಾದ ಸಾಧನವನ್ನು ಏಕಚಿತ್ತದಿಂದ ಸಾಧಿಸಿಕೊಂಡವರಿಗೆ ಮಾತ್ರ ಕಾಣಿಸಿಕೊಳ್ಳುವನು. ಹಸುಗೂಸಾದ ನೀನೆಂತು ದೇವನನ್ನು ಕಾಣುವೆ? ಬೇಡ, ಸುಮ್ಮನೆ ಹಿಂದಿರುಗು.

ಧ್ರುವ: ಸ್ವಾಮಿ, ನಾನು ಎಳೆಯನಾದ ಮಾತ್ರಕ್ಕೆ ದೇವರನ್ನು ಸ್ಮರಿಸುವ ಮತ್ತು ಕಾಣುವ ಅಧಿಕಾರವಿಲ್ಲದೆ ಹೋಯಿತೆ? ನಾನು ಎಳೆಯನಾದರೆ ನನ್ನ ಭಕ್ತಿಗೆ ಎಳೆತನವಿದೆಯೆ? ನಾನು ದೇವರನ್ನು ಕಂಡಲ್ಲದೆ ಹಿಂದಿರುಗಲಾರೆನು.

ನಾರದ: ಮಗೂ, ನಿನಗೆ ಲೋಕಜ್ಞಾನವರಿಯದು. ದೇವರನ್ನು ಒಲಿಸಿಕೊಳ್ಳುವುದೆಂದರೆ ಸಾಮಾನ್ಯ ಕೆಲಸವಲ್ಲ. ಅದಕ್ಕೆ ಕಾಲಪರಿಮಿತಿಯೂ ಇಲ್ಲ. ಹೀಗಿದ್ದು ನೀನೇಕೆ ಆ ದಾರಿಗಿಳಿವೆ? ಎಲ್ಲವನ್ನೂ ಮರೆತು ಹಿಂದಿರುಗು. ಅಲ್ಲಿ ನಿನ್ನ ತಾಯಿಯು ನಿನಗಾಗಿ ಪರಿತಪಿಸುತ್ತಿರಬಹುದು, ಬೇಗನೆ ಹೋಗಿ ಅವಳನ್ನು ಸೇರು. ತಾಯಿಯೇ ಇಹದ ದೇವರು, ಮಗು. ಅವಳು ಪ್ರಸನ್ನಳಾದರೆ ದೇವರು ಒಲಿದಂತೆಯೇ ಸರಿ. ಆದುದರಿಂದ ಹಿಂದಿರುಗಿ ತಾಯಿಯನ್ನು ಸೇರು. ನಿನಗೆ ದಾರಿ ಸಿಗದಿದ್ದರೆ

ನಾನೇ ನಿನ್ನನ್ನು ಮನೆಗೆ ಮುಟ್ಟಿಸುವೆನು. ಬಾ, ಹೋಗೋಣ, (ಧ್ರುವನ ಕೈಹಿಡಿದೆಳೆವನು.)

ಧ್ರುವ: (ತನ್ನ ಕೈಯನ್ನು ಬಿಡಿಸಿಕೊಂಡು) ಪೂಜ್ಯರೇ, ತಮ್ಮ ಮಾತೇನೋ ಸರಿ. ಅದರೆ, ತಾಯಿಯನ್ನು ಮೀರಿದ ದೇವನೊಬ್ಬನಿರುವನೆಂದು ತಾಯಿಯೇ ನನಗೆ ಹೇಳಿರುವಳು. ಏನೇ ಸಂಭವಿಸಿದರೂ ಅವನನ್ನು ಕಂಡಲ್ಲದೆ ಮರಳಲಾರೆನು. ನೀವು ಅವನನ್ನು ಕಂಡಿದ್ದರೆ, ಅರಿತಿದ್ದರೆ ನನಗೆ ತೋರಿಸಿಕೊಡಿರಿ. ಇಲ್ಲದಿದ್ದರೆ ನಾನೇ ಅರಸಿಕೊಳ್ಳುವೆನು.

ನಾರದ: ಕುವರ, ಈ ಕಾಡಿನ ಗರ್ಭದ ಕ್ರೂರಮೃಗಗಳ ಮಧ್ಯೆ ನೀನೆಂತು ಜೀವ ಹಿಡಿದಿರಬಲ್ಲೆ?

ಧ್ರುವ: ಮಹಾನುಭಾವರೆ, ನನ್ನ ಅತ್ಮ-ದೇಹ ಇವೆರಡೂ ■ ಪರಮಾತ್ಮನಿಗೇ ಸೇರಿದುದಾಗಿವೆ. ಸಮಸ್ತ ಜೀವಕೋಟಿಗಳನ್ನೂ ಸಲಹುವವನು ಅವನೊಬ್ಬನೇ ಆಗಿರುವಾಗ, ನಮಗಾ ಚಿಂತೆಯೇಕೆ ಪೂಜ್ಯರೆ?

ನಾರದ: (ಧ್ರುವನ ಮೈದಡವಿ ಪ್ರೀತಿಯಿಂದ) ಕುವರ, ನಿನ್ನ ಭಕ್ತಿಗೂ ಆತ್ಮಬಲಕ್ಕೂ ಮೆಚ್ಚಿದೆನು. ನಿನ್ನ ಮನೋಸ್ಥೈರ್ಯದ ಮುಂದೆ ಮಹಾ ಮಹಾ ಮುನಿಯೋಗಿಗಳು ಕೂಡ ನಾಚಿ ತಲೆತಗ್ಗಿಸಬೇಕು. ಮಗೂ, ನೀನು ಖಂಡಿತವಾಗಿಯೂ ದೇವರನ್ನು ಕಾಣುವೆ. ಇದೊ, ನಿನಗೆ ದೇವದರ್ಶನದ ಸುಲಭಸಾಧನವನ್ನು ಹೇಳಿಕೊಡುವೆನು. "ಓಂ ನಮೋ ಭಗವತೇ ವಾಸುದೇವಾಯ"

ಧ್ರುವ: ಪೂಜ್ಯರೆ, ನಾನು ಕೃತಾರ್ಥನಾದೆನು! (ಮಂತ್ರ ಉಚ್ಚರಿಸುವನು)

ನಾರದ: (ನಾಲ್ಕಾರು ಬಾರಿ ಹೇಳಿಸಿ) ಈ ಮಹಾಮಂತ್ರವನ್ನು ತದೇಕಚಿತ್ತದಿಂದ ಸ್ಮರಿಸಿದಲ್ಲಿ ನಿನಗೆ ಖಂಡಿತವಾಗಿಯೂ ಶೀಘ್ರದಲ್ಲಿಯೇ ದೇವರ ದರ್ಶನವಾಗುವುದು. (ತುಸು ದೂರಕ್ಕೆ ಕೈತೋರಿಸಿ) ನೋಡದೊ! ಅಲ್ಲಿ ಹರಿಯುತ್ತಿರುವುದೇ ಯಮುನಾನದಿಯು. ಅದರ ತೀರದಲ್ಲಿರುವೀ ವನವನ್ನು ಮಧುವನವೆಂದೆನ್ನುವರು. ಇಲ್ಲೇ ಕುಳಿತು ಅನನ್ಯಭಕ್ತಿಯಿಂದ ದೇವರನ್ನು ನುತಿಸು.

ಧ್ರುವ: ಮಹಾಮಹಿಮರೆ, ಹಾಗೆಯೆ ಮಾಡುವೆನು, (ಎರಗುವನು).

ನಾರದ: (ಆಶೀರ್ವದಿಸಿ) ನಾರಾಯಣ! ನಾರಾಯಣ!! (ಹೋಗುವನು).

(ತೆರೆ)

## ದೃಶ್ಯ ೮.

(ಅರಮನೆ. ಉತ್ತಾನಪಾದನು ಪುತ್ರಶೋಕದಿಂದ ಭ್ರಮಿತನಾಗಿ ಪ್ರಲಾಪಿಸುತ್ತಿರುವನು.)

**ಉತ್ತಾನಪಾದ:** ಅಯ್ಯೋ! ನನ್ನೊಡಲು ದಹಿಸುತ್ತಿದೆ! ನಾನು ಈ ಪಾಪಲೇಪನವನ್ನು ಹೇಗೆ ಕಳೆಯಲಿ? ನಿರಪರಾಧಿಗಳಾದ ಸುನೀತಿ ಧ್ರುವರುಗಳ ನಿಡುಸುಯ್ಲು ನನ್ನ ಮನೋರಾಜ್ಯದ ಶಾಂತಿಯನ್ನೇ ಕೆಡಿಸುತ್ತಲಿದೆ. ಅವರ ಮನೋಬೇಗುದಿಯು ನನ್ನ ಹೃದಯವನ್ನು ಸುಟ್ಟು ಬೂದಿ ಮಾಡುತ್ತಲಿದೆ. ಅಯ್ಯೋ, ನಾನೆಂತು ಈ ದುಗುಡದ ಹೊತ್ತು ಬದುಕಿರಲಿ? (ತಲೆಗೆ ಕೈಹೊತ್ತು) ಕಂದಾ, ನೀನೆಲ್ಲಿರುವೆ? ಕಾಡಿನಲ್ಲಿ ಎಂಥ ಕಷ್ಟಪಡುತ್ತಿರುವೆ?

ಮಂತ್ರಿ: (ಪ್ರವೇಶಿಸಿ) ಮಹಾ ಪ್ರಭೋ! (ವಂದಿಸುವನು)

ಉತ್ತಾನಪಾದ: ಯಾರು, ಮಂತ್ರಿಯೇ? ಧ್ರುವನು ಬಂದನೇ?

ಮಂತ್ರಿ: (ತಲೆ ಬಾಗಿ) ಇಲ್ಲ ಪ್ರಭೋ, ರಾಜಕಾರ್ಯದ ನಿಮಿತ್ತ ನಿಮ್ಮನ್ನು ಕಾಣಬೇಕಾಯಿತು.

ಉತ್ತಾನಪಾದ: (ವಿಕಟವಾಗಿ ನಗುತ್ತ) ರಾಜಕಾರ್ಯ! ಯಾವ ರಾಜಕಾರ್ಯ? ....ರಾಜನಾರು? ನೀನೋ.... ನಾನೋ .. ಅಲ್ಲವೇ ಧ್ರುವನೋ? (ತುಸು ತಡೆದು) ನೀನು ರಾಜನಲ್ಲ....ನಾನಂತೂ ಅಲ್ಲವೇ ಅಲ್ಲ. ಹಾಗಿದ್ದರೆ, ರಾಜನಾರು? ಧ್ರುವನು....ಹೌದು! ಅವನೇ ರಾಜನು! ಸಂಶಯವಿಲ್ಲ. (ಆಲೋಚಿಸಿ) ಆದರೆ, ಅವನೇ ಇಲ್ಲದಿರುವಾಗ ರಾಜಕಾರ್ಯವಾಗುವುದೆಂತು? (ಮಂತ್ರಿಯೊಡನೆ) ಇಲ್ಲ. ರಾಜನೂ ಇಲ್ಲ; ಕಾರ್ಯವೂ ಇಲ್ಲ. ನಡೆ ಇಲ್ಲಿಂದ! ಹೂಂ....ಹೊರಡು.

ನಾರದ: (ಪ್ರವೇಶಿಸುತ್ತ) ನಾರಾಯಣ! ನಾರಾಯಣ!!

ಉತ್ತಾನಪಾದ: ಯಾರು ದೇವರ್ಷಿಗಳೇ? (ವಂದಿಸಿ) ಆಸೀನರಾಗಬೇಕು.

ನಾರದ: ನಾರಾಯಣ! ನಾರಾಯಣ! (ಕುಳಿತು ಕೊಳ್ಳುವನು. ಬಳಿಕ ರಾಜನನ್ನು ಕಾಲಿನಿಂದ ತಲೆಯ ತನಕ ನೋಡಿ) ರಾಜಾ, ನಿನ್ನ ಮುಖವೇಕೆ ಹೀಗೆ ಕಂದಿಹೋಗಿದೆ? ಮೈಯೇಕೆ ಬಡವಾಗಿದೆ? ನಿನ್ನ ಸ್ವಾಸ್ಥ್ಯ ಕೆಟ್ಟಂತಿದೆ.

ಉತ್ತಾನಪಾದ: ಸ್ವಾಮಿ, ನನಗಿನ್ನೆಲ್ಲಿಯ ಸ್ವಾಸ್ಥ್ಯ? ಅದು ಧ್ರುವ ನೊಂದಿಗೇ ಹೊರಟು ಹೋಗಿರುವುದು.

ನಾರದ: (ಆಶ್ಚರ್ಯಪಟ್ಟವನಂತೆ ನಟಿಸಿ) ಹಾಗೆಂದರೇನು? ನನ ಗೊಂದೂ ಅರ್ಥವಾಗುತ್ತಿಲ್ಲವಲ್ಲ.

ಉತ್ತಾನಪಾದ: ಮಹಾನುಭಾವರೆ, ತ್ರಿಲೋಕ ಸಂಚಾರಿಗಳಾದ ತಮಗೆ ಅರಿಯದ ವಿಚಾರಗಳಿವೆಯೆ? ತಾವು ತಿಳಿದೂ ತಿಳಿದೂ ನನ್ನ ಕರ್ಮ ಕಥೆಯನ್ನು ನನ್ನ ಬಾಯಿಯಿಂದಲೇ ಹೊರಡಿಸಲು ಪ್ರಯತ್ನಿಸುತ್ತಿರುವಿರಾ? ಆ ಸುರುಚಿಯೆಂಬ ಪಿಶಾಚಿಯು ನನ್ನ ಜೀವನವನ್ನೇ ಕಬಳಿಸಿಬಿಟ್ಟಳು. ಧ್ರುವನನ್ನು ಕಾಡಿನಲ್ಲಿ ಅಂಡಲೆಯುವಂತೆ ಮಾಡಿಬಿಟ್ಟಳು.

ನಾರದ: ರಾಜ, ಮನಸ್ಸೊಂದು ಹಾಗೆಲ್ಲ ಹೇಳಬಾರದು. ಆಗುವುದೆ ಲ್ಲವೂ ಒಳ್ಳೆಯದಕ್ಕೆಂಬುದನ್ನು ಮರೆತೆಯಾ? ಆ ದೃಷ್ಟಿಯಿಂದ ನೋಡಿದರೆ ಸುರುಚಿಯು ಒಳಿತನ್ನೇ ಮಾಡಿರುವಳು. ಆಕೆಯು ಧ್ರುವನಿಗೆ ಕೇಡ ನ್ನುಂಟು ಮಾಡಲಿಲ್ಲ. ಆತನಿಗೆ ಸತ್ಪಥವನ್ನು ತೋರಿಸಿ ಅವನ ಶ್ರೇಯಸ್ಸಿಗೆ ಕಾರಣಳಾಗಿದ್ದಾಳೆ. ಧ್ರುವನು ಕೂಡ ಆಕೆಯನ್ನು ದ್ವೇಷಿಸುವುದಿಲ್ಲ. ನಾನೀಗ ತಾನೆ ಅವನನ್ನು ಕಂಡು ಬಂದಿರುವೆನು.

ಉತ್ತಾನಪಾದ: (ಸಂತೋಷದಿಂದ) ಹಾಂ! ನಿಜವೆ? ತಾವು ಅವ ನನ್ನು ಕಂಡಿರುವಿರಾ? ಆದರೆ, ಅವನನ್ನು ತಾವಾದರೂ ತಿಳಿದು ಹೇಳಿ ತಮ್ಮ ಜೊತೆಯಲ್ಲಿ ಕರೆದುಕೊಳ್ಳಲಿಲ್ಲವೇಕೆ ಸ್ವಾಮಿ? ದಯಮಾಡಿ ಈಗ ಅವನಿ ರುವ ಸ್ಥಳವನ್ನಾದರೂ ತಿಳಿಸುವಿರಾ?

ನಾರದ: ಏಕೆ? ಅವನನ್ನು ಕರೆದು ತರುವ ಕಾರ್ಯವು ನಿನ್ನಿಂದಾ ಗದು; ಹೆಚ್ಚೇಕೆ, ತ್ರಿಮೂರ್ತಿಗಳಿಂದಲೂ ಆಗಲಾರದು. ಅವನ ನಿರ್ಧಾ ರವು ಅಚಲವಾದುದಾಗಿದೆ.

ಉತ್ತಾನಪಾದ: ಹಾಗಾದರೆ ಇನ್ನೇನು ಮಾಡೋಣ?

ನಾರದ: ಏನೂ ಮಾಡಬೇಕಾಗಿಲ್ಲ. ಅವನು ನಿನಗೆ ಕೀರ್ತಿ ತರ ತಕ್ಕ ಕುವರನು. ಅವನನ್ನು ಪಡೆದ ನೀನು ಮತ್ತು ಸುನೀತಿಯು ನಿಜವಾ ಗಿಯೂ ಧನ್ಯರು. ಅವನು ದೇವರನ್ನು ಒಲಿಸಿ ಬಂದೇ ಬರುವನು. ಅಲ್ಲಿಯ ತನಕ ಸಹಿಸಿಕೊಂಡಿರು. ಸುರುಚಿಯನ್ನೂ ಸುನೀತಿಯನ್ನೂ ಏಕರೀತಿ ಯಿಂದ ಕಾಣು.

Edited, Printed & Published by K. V. Shenoy
at the Prabhat Printers, Ltd., Mangalore.